## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮ ನಿರ್ದೇಶಿತರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **423** |
| ಉತ್ತರಿಸಬೇಕಾದ ದಿನಾಂಕ | : | 15.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿನ ಗ್ರಾಮಾಂತರ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಾಸಿಸುವ ವಸತಿ ಹೀನರ ಸಮೀಕ್ಷೆಯನ್ನು ಯಾವ ವರ್ಷದಲ್ಲಿ ನಡೆಸಲಾಗಿದೆ ; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ "2022 ಕ್ಕೆ ಎಲ್ಲರಿಗೂ ಸೂರು" ಎನ್ನುವ ಘೋಷಣೆಯಡಿ ಪ್ರಧಾನಮಂತ್ರಿ ಅವಾಸ್ ಯೋಜನೆ(ಗ್ರಾಮೀಣ) ಅಡಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ 2018 ರಲ್ಲಿ ಕೇಂದ್ರ ಸರ್ಕಾರದ ಆದೇಶದಂತೆ ವಸತಿ & ನೀವೇಶನ ರಹಿತರ ಸಮೀಕ್ಷೆ ಕೈಗೊಂಡಿದ್ದು, ಸದರಿ ಸಮೀಕ್ಷೆಯಲ್ಲಿ 18,72,030 ವಸತಿ ರಹಿತರು 7,15,016 ನಿವೇಶನ ರಹಿತರು ಸೇರಿ ಒಟ್ಟು 25,87,046 ವಸತಿ & ನಿವೇಶನ ರಹಿತರು ಕಂಡು ಬಂದಿರುತ್ತಾರೆ.<br><br>ಪ್ರಧಾನ ಮಂತ್ರಿ ಅವಾಸ್ ಯೋಜನೆ(ನಗರ) ಅಡಿಯಲ್ಲಿ ನಗರ ಪ್ರದೇಶದಲ್ಲಿ 2016-17 & 2017-18 ರಲ್ಲಿ ವಸತಿ & ನೀವೇಶನ ರಹಿತರ ಸಮೀಕ್ಷೆ ಕೈಗೊಂಡಿದ್ದು, ಸದರಿ ಸಮೀಕ್ಷೆಯಲ್ಲಿ ವಸತಿ ರಹಿತರು 1061392 ನಿವೇಶನ ರಹಿತರು 345703 ಸೇರಿ ಒಟ್ಟು 1407265 ವಸತಿ & ನಿವೇಶನ ರಹಿತರು ಕಂಡು ಬಂದಿರುತ್ತಾರೆ. |
| (ಆ) | ಗ್ರಾಮಾಂತರ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಾಸಿಸುವ ವಸತಿ ಹೀನರಿಗೆ ವಸತಿ ಕಲ್ಪಿಸಲು ರಾಜ್ಯ ಸರ್ಕಾರ ರೂಪಿಸಿರುವ ಯೋಜನೆಗಳು ಯಾವುವು ; ಈ ಯೋಜನೆಗಳನ್ನು ಯಾವ ಇಲಾಖೆ/ನಿಗಮಗಳಿಂದ ಅನುಷ್ಠಾನಗೊಳಿಸಲಾಗುತ್ತಿದೆ ; (ಸಂಪೂರ್ಣ ಮಾಹಿತಿ ನೀಡುವುದು) | ಗ್ರಾಮಾಂತರ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಾಸಿಸುವ ವಸತಿಹೀನರಿಗೆ ವಸತಿ ಕಲ್ಪಿಸಲು ರಾಜ್ಯ ಸರ್ಕಾರವು ವಸತಿ ಇಲಾಖೆಯಿಂದ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>**ವಸತಿ ಯೋಜನೆಗಳು :**<br>1. ಬಸವ ವಸತಿ ಯೋಜನೆ<br>2. ಡಾ\|\| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಹಾಗೂ ನಗರ)<br>3. ದೇವರಾಜು ಅರಸು ಯೋಜನೆ (ಗ್ರಾಮೀಣ ಹಾಗೂ ನಗರ)<br>4. ವಾಜಪೇಯಿ ನಗರ ವಸತಿ ಯೋಜನೆ<br>5. ಮುಖ್ಯಮಂತ್ರಿಗಳ ಒಂದು ಲಕ್ಷ ಬೆಂಗಳೂರು ಬಹು ಮಹಡಿ ಯೋಜನೆ.<br><br>**ನಿವೇಶನ ಯೋಜನೆಗಳು :**<br>1. ಇಂದಿರಾ ಗ್ರಾಮೀಣ ವಸತಿ ನಿವೇಶನ ಯೋಜನೆ<br>2. ವಾಜಪೇಯಿ ನಗರ ನಿವೇಶನ ಯೋಜನೆ |

| (ಇ) | ಈ ವಸತಿ ಯೋಜನೆಗಳಿಗೆ ಕೇಂದ್ರ ಸರ್ಕಾರದಿಂದ ಯಾವ ಅನುಪಾತದಲ್ಲಿ ಸಹಾಯಧನ, ಆರ್ಥಿಕ ನೆರವು ಮತ್ತು ಇತರೆ ಸೌಲಭ್ಯಗಳು ರಾಜ್ಯ ಸರ್ಕಾರಕ್ಕೆ ಮತ್ತು ಫಲಾನುಭವಿಗಳಿಗೆ ದೊರೆಯುತ್ತಿವೆ; ಕಳೆದ 3 ವರ್ಷ ಮತ್ತು ಪ್ರಸ್ತುತ ವರ್ಷದಲ್ಲಿ ಪಡೆದಿರುವ ಕೇಂದ್ರದ ನೆರವು ಎಷ್ಟು; (ಸಂಪೂರ್ಣ ವಿವರ ನೀಡುವುದು) | ಪ್ರಧಾನ ಮಂತ್ರಿ ಆವಾಸ್ ಗ್ರಾಮೀಣ ಯೋಜನೆಯಡಿ ಕೇಂದ್ರ ಸರ್ಕಾರವು ರೂ.1.20 ಲಕ್ಷ ಸಹಾಯಧನವನ್ನು ನಿಗಧಿಪಡಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶೇ.60:40ರ ಅನುಪಾತದಲ್ಲಿ ಅನುದಾನ ಭರಿಸುತ್ತಿದ್ದು, ಇನ್ನೂಳಿದಂತೆ ರಾಜ್ಯ ಸರ್ಕಾರವು ಪ.ಜಾ ಮತ್ತು ಪ.ಪಂಗಡದ ಫಲಾನುಭವಿಗಳಿಗೆ ರೂ.30,000/-ಗಳ ಹೆಚ್ಚುವರಿ ಸಹಾಯಧನವನ್ನು ಭರಿಸುತ್ತಿದೆ ಹಾಗೂ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಅಡಿ ಕೇಂದ್ರ ಸರ್ಕಾರವು ಒಂದು ಮನೆಯ ನಿರ್ಮಾಣಕ್ಕೆ ಬಿ.ಎಲ್.ಸಿ/ಎ.ಎಚ್.ಪಿ ರೂ. 1.50 ಲಕ್ಷ, ಐ.ಎಸ್.ಎಸ್.ಆರ್ ಘಟಕದಡಿ ರೂ.1.00 ಲಕ್ಷ ಸಹಾಯಧನ ಒದಗಿಸುತ್ತದೆ.<br><br>2018-19 ನೇ ಸಾಲಿನಿಂದ 2021-22 ನೇ ಸಾಲಿನವರೆಗೆ ಕೇಂದ್ರ ಸರ್ಕಾರದಿಂದ ಪಡೆದಿರುವ ಅನುದಾನದ ವಿವರಗಳು ಈ ಕೆಳಗಿನಂತಿದೆ:<br><br>(ರೂ.ಕೋಟಿಗಳಲ್ಲಿ) |
|---|---|---|

| ಯೋಜನೆ | ವರ್ಷ | | | | |
|---|---|---|---|---|---|
| | 2018-19 | 2019-20 | 2020-21 | 2021-22 | ಒಟ್ಟು |
| ಪ್ರಧಾನ ಮಂತ್ರಿ ಆವಾಸ್ ಯೋಜನೆ - ಗ್ರಾಮೀಣ | 188.22 | 309.60 | 0.00 | 0.00 | 497.82 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ - ನಗರ | 1432.32 | 410.83 | 263.37 | 107.46 | 2213.98 |
| ರಾಜೀವ್ ಆವಾಸ್ ಯೋಜನೆ | 106.48 | 0.00 | 0.00 | 0.00 | 106.48 |
| **ಒಟ್ಟು** | **1727.02** | **720.43** | **263.37** | **107.46** | **2818.28** |

ಸಂಖ್ಯೆ :ವಇ 291 ಹೆಚ್‌ಎಎಂ 2021

**(ವಿ. ಸೋಮಣ್ಣ)**
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು